


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 09-03-2021 ಪ್ರಶ್ನೆ ಸಂಖ್ಯೆ : 699(805)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಂ. ನಾರಾಯಣಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 09-03-2021

ಉತ್ತರಿಸುವ ಸಚಿವರು: ಮಾನ್ಯ ಸಹಕಾರ ಸಚಿವರು

ವಿಷಯ : ರಾಜ್ಯದಲ್ಲಿರುವ ಗೃಹ ನಿರ್ಮಾಣ ಸಹಕಾರ ಸಂಘಗಳ ಬಗ್ಗೆ

(ಅ) ರಾಜ್ಯದಲ್ಲಿರುವ ಒಟ್ಟು ಗೃಹ ನಿರ್ಮಾಣ ಸಹಕಾರ ಸಂಘಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು ಮಾಹಿತಿ ನೀಡುವುದು)

(ಆ) ಅವುಗಳಲ್ಲಿ ನಿಷ್ಕ್ರಿಯೆಗೊಂಡಿರುವ ಸಹಕಾರ ಸಂಘಗಳು ಎಷ್ಟು ಗೃಹ ನಿರ್ಮಾಣ ಸಂಘಗಳು ಕ್ರಿಯಾಶೀಲವಾಗಿವೆ; ಎಷ್ಟು ಸಹಕಾರ ಸಂಘಗಳನ್ನು ಪ್ರಾರಂಭಿಸಿ ನಿಗಧಿತ ಮೊತ್ತವನ್ನು ಪಡೆದುಕೊಂಡಿದ್ದರೂ 10-15 ವರ್ಷಗಳಿಂದಲೂ ನಿವೇಶನ ನೀಡದೆ ವಿಳಂಬ ನೀತಿಯನ್ನು ಅನುಸರಿಸುತ್ತಿರುವ ಗೃಹ ನಿರ್ಮಾಣ ಸಂಘಗಳ ವಿರುದ್ಧ ದೂರು ದಾಖಲಿಸಿಕೊಂಡು, ಯಾವುದಾದರೂ ಕಾನೂನು ಕ್ರಮಗಳನ್ನು ಜರುಗಿಸಲಾಗಿದೆ; ಹಾಗಿದ್ದಲ್ಲಿ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು)

(ಇ) ನಿಷ್ಕ್ರಿಯೆಗೊಂಡಿರುವ ಗೃಹ ನಿರ್ಮಾಣ ಸಹಕಾರ ಸಂಘಗಳು ತಮ್ಮ ಸದಸ್ಯರುಗಳಿಂದ ಪಡೆದುಕೊಂಡಿರುವ ಹಣದ ಮೊತ್ತ ಮತ್ತು ಬಡ ಮಧ್ಯಮ ವರ್ಗದ ನಿವೇಶನಾಕಾಂಕ್ಷಿಗಳಿಗೆ ವಂಚನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು?